## ಕರ್ನಾಟಕ ವಿಧಾನ ಪರಿಷತ್

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 319 |
| ಸದಸ್ಯರ ಹೆಸರು | ಶ್ರೀ ಕೆ.ಹರೀಶ್ ಕುಮಾರ್<br>(ವಿಧಾನಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | 06.03.2020 |

| ಕ್ರಸಂ | ಪ್ರಶ್ನೆಗಳು | ಉತ್ತರ |
|---|---|---|
| ಅ. | ಉಡುಪಿ ಜಿಲ್ಲೆಯ ಕುಂದಾಪುರ ತಾಲ್ಲೂಕಿನ ಅಮವಾಸೆಬೈಲು ಗ್ರಾಮದ ರಸ್ತೆ ಮತ್ತು ಸೇತುವೆಯ ಪುನರ್ ರಚನೆ/ಪುನರ್ ನಿರ್ಮಾಣ ಕಾಮಗಾರಿಗಳ ಕುರಿತಂತೆ ಸರ್ಕಾರದಿಂದ ಬಿಡುಗಡೆಯಾದ ಅನುದಾನವೆಷ್ಟು; (ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ:123:ಆರ್‌ಆರ್‌ಸಿ:2019 ದಿನಾಂಕ 26/11/2019 ಲೆಕ್ಕ ಶೀರ್ಷಿಕೆ 5054-03-337-0-75-059 ರಡಿಯಲ್ಲಿ) | ಉಡುಪಿ ಜಿಲ್ಲೆಯ ಕುಂದಾಪುರ ತಾಲ್ಲೂಕಿನ ಅಮವಾಸೆಬೈಲು ಗ್ರಾಮದ ರಸ್ತೆ ಮತ್ತು ಸೇತುವೆಯ ಪುನರ್ ರಚನೆ/ಪುನರ್ ನಿರ್ಮಾಣ ಕಾಮಗಾರಿ ಕುರಿತಂತೆ ರೂ.300.00 ಲಕ್ಷಗಳಲ್ಲಿ 10 ಕಾಮಗಾರಿಗಳನ್ನು ಕೈಗೊಳ್ಳಲು ಆಡಳಿತಾತ್ಮಕ ಅನುಮೋದನೆ ನೀಡಿದೆ. ಈ ಪೈಕಿ ರೂ.165.00 ಲಕ್ಷಗಳನ್ನು ಬಿಡುಗಡೆಗೊಳಿಸಿದೆ. |
| ಆ. | ಸದರಿ ಅನುದಾನವನ್ನು ಉದ್ದೇಶಿತ ಕಾಮಗಾರಿಗಳಿಗೆ ಬಳಸಲಾಗಿದೆಯೇ; | ಹೌದು |
| ಇ | ಈ ಕಾಮಗಾರಿಗಳ ಬದಲಾವಣೆಗೆ ಪ್ರಸ್ತಾವನೆ ಸಲ್ಲಿಸಲಾಗಿದೆಯೇ; ಸಲ್ಲಿಸಿದಲ್ಲಿ; ಪ್ರಸ್ತಾವನೆಯ ಪ್ರತಿಯೊಂದಿಗೆ ಸಂಪೂರ್ಣ ಮಾಹಿತಿ ನೀಡುವುದು; | ಹೌದು, ವಿವರಗಳನ್ನು ಅನುಬಂಧದಲ್ಲಿ ನೀಡಿದೆ. |
| ಈ | ಸದರಿ ಕಾಮಗಾರಿಗೆ ಸಂಬಂಧಿಸಿದಂತೆ ಯಾವುದಾದರು ಆಕ್ಷೇಪಣೆ ಸಲ್ಲಿಸಲಾಗಿದೆಯೇ; (ಮಾಹಿತಿ ನೀಡುವುದು) | ಸರ್ಕಾರದ ಗಮನಕ್ಕೆ ಬಂದಿರುವುದಿಲ್ಲ |
| ಉ | ಮೇಲ್ಕಂಡ ಕಾಮಗಾರಿಗೆ ನೀಡಲಾಗಿರುವ ಒಟ್ಟು ಅನುದಾನ ಕುರಿತಂತೆ ಸಂಪೂರ್ಣ ಮಾಹಿತಿ ಒದಗಿಸುವುದು? | ರೂ.165.00 ಲಕ್ಷಗಳನ್ನು ಬಿಡುಗಡೆ ಗೊಳಿಸಿದೆ. |

ಕಡತ ಸಂಖ್ಯೆ: ಗ್ರಾಅಪ:01/27:ಆರ್‌ಆರ್‌ಸಿ:2020

(ಕೆ.ಎಸ್.ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

LCQ 319

## ಕರ್ನಾಟಕ ಸರ್ಕಾರದ ನಡವಳಿಗಳು

**ವಿಷಯ:** ರಾಜ್ಯದಲ್ಲಿ ಸತತವಾಗಿ ಸುರಿದ ಭಾರಿ ಮಳೆ ಹಾಗೂ ಪ್ರವಾಹದಿಂದ ಹಾನಿಗೊಳಗಾದ ಉಡುಪಿ ಜಿಲ್ಲೆ ಕುಂದಾಪುರ ತಾಲ್ಲೂಕು ಅಮಾಸೆಬೈಲು ಗ್ರಾಮದ ರಸ್ತೆ ಮತ್ತು ಸೇತುವೆ ಕಾಮಗಾರಿಗಳ ಪುನರ್ ರಚನೆ, ನವೀಕರಣ ಹಾಗೂ ಪುನರ್ ನಿರ್ಮಾಣ ಕೈಗೊಳ್ಳಲು ಆಡಳಿತಾತ್ಮಕ ಅನುಮೋದನೆ ನೀಡುವ ಕುರಿತು.

**ಓದಲಾಗಿದೆ:**
1. ಆರ್ಥಿಕ ಇಲಾಖೆಯ ಪತ್ರ ಸಂಖ್ಯೆ: ಆಇ 03 ಬಿಎಸ್‌ಜಿ 2019, ದಿನಾಂಕ: 23.10.2019.
2. ಮಾನ್ಯ ಗ್ರಾಅಪ ಸಚಿವರು ಅನುಮೋದಿಸಿದಂತೆ.

*****

**ಪ್ರಸ್ತಾವನೆ**

ಓದಲಾದ 1 ರಲ್ಲಿ ರಾಜ್ಯದಲ್ಲಿ ಸತತವಾಗಿ ಸುರಿದ ಭಾರಿ ಮಳೆ ಹಾಗೂ ಪ್ರವಾಹದಿಂದ ಹಾನಿಗೊಳಗಾದ ಗ್ರಾಮೀಣ ರಸ್ತೆ ಮತ್ತು ಸೇತುವೆ ಕಾಮಗಾರಿಗಳ ಪುನರ್ ರಚನೆ, ನವೀಕರಣ ಹಾಗೂ ಪುನರ್ ನಿರ್ಮಾಣ ಕೈಗೊಳ್ಳಲು 2019-20ನೇ ಸಾಲಿನ ಪೂರಕ ಅಂದಾಜು - 2ರಲ್ಲಿ ಲೆಕ್ಕ ಶೀರ್ಷಿಕೆ: 5054-03-337-0-75-059ರಡಿ ರೂ. 1500.00 ಕೋಟಿಗಳನ್ನು ಒದಗಿಸ ಲಾಗಿರುತ್ತದೆ.

ಅದರಂತೆ, ಓದಲಾದ 2 ರಲ್ಲಿ ಅನುಮೋದಿಸಿದಂತೆ ಉಡುಪಿ ಜಿಲ್ಲೆ ಕುಂದಾಪುರ ತಾಲ್ಲೂಕು ಅಮಾಸೆಬೈಲು ಗ್ರಾಮದಲ್ಲಿ ಇತ್ತೀಚೆಗೆ ಸುರಿದ ಭಾರಿ ಮಳೆ ಹಾಗೂ ಪ್ರವಾಹದಿಂದ ಹಾಳಾದ ಕೆಳಕಂಡ ಗ್ರಾಮೀಣ ರಸ್ತೆ ಮತ್ತು ಸೇತುವೆ ಕಾಮಗಾರಿಗಳನ್ನು ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ (ಪಿ.ಆರ್.ಇ.ಡಿ)ದ ಮೂಲಕ ಕೈಗೊಳ್ಳಲು ಅನುಮೋದನೆ ನೀಡಲು ಸರ್ಕಾರವು ತೀರ್ಮಾನಿಸಿರುತ್ತದೆ. ಆದ್ದರಿಂದ ಈ ಆದೇಶ,

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ:123:ಆರ್‌ಆರ್‌ಸಿ:2019, ಬೆಂಗಳೂರು, ದಿನಾಂಕ: 26.11.2019**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಉಡುಪಿ ಜಿಲ್ಲೆ ಕುಂದಾಪುರ ತಾಲ್ಲೂಕು ಅಮಾಸೆಬೈಲು ಗ್ರಾಮದಲ್ಲಿ ಇತ್ತೀಚೆಗೆ ಸುರಿದ ಭಾರಿ ಮಳೆ ಹಾಗೂ ಪ್ರವಾಹದಿಂದ ಹಾಳಾದ ಕೆಳಕಂಡ ಗ್ರಾಮೀಣ ರಸ್ತೆ ಮತ್ತು ಸೇತುವೆ ಕಾಮಗಾರಿಗಳನ್ನು ಲೆಕ್ಕ ಶೀರ್ಷಿಕೆ 5054-03-337-0-75-059 ರಡಿ ರೂ. 300.00 ಲಕ್ಷಗಳ (ರೂಪಾಯಿ ಮೂರು ನೂರು ಲಕ್ಷಗಳು ಮಾತ್ರ) ಮೊತ್ತದಲ್ಲಿ ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ (ಪಿ.ಆರ್.ಇ.ಡಿ)ದ ಮೂಲಕ ಕೈಗೊಳ್ಳಲು ಅನುಮೋದನೆ ನೀಡಲು ಸರ್ಕಾರವು ಹರ್ಷಿಸುತ್ತದೆ.

| ಕ್ರ. ಸಂ | ಕಾಮಗಾರಿಗಳ ವಿವರ | ಅಂದಾಜು ಮೊತ್ತ (ರೂ.ಲಕ್ಷಗಳಲ್ಲಿ) |
|---|---|---|
| 1 | ಉಡುಪಿ ಜಿಲ್ಲೆ ಕುಂದಾಪುರ ತಾಲ್ಲೂಕು ಅಮಾಸೆಬೈಲು ಗ್ರಾಮದ ಪಂಜುರ್ಲಿ ಹಾಡಿಯಿಂ ಖುಡ್ಡು ಪೂಜಾರ್ತಿ ಮನೆವರೆಗೆ ಕಾಂಕ್ರೀಟೀಕರಣ 2000 ಮೀಟರ್ ರಸ್ತೆ ನಿರ್ಮಿಸುವುದು | 70.00 |
| 2 | ಉಡುಪಿ ಜಿಲ್ಲೆ ಕುಂದಾಪುರ ತಾಲ್ಲೂಕು ಅಮಾಸೆಬೈಲು ಗ್ರಾಮದ ದೇವಸ್ಥಾನದಿಂದ ಮೂಡಬೈಲು ಮದಗದ ತನಕ ಕಾಂಕ್ರೀಟೀಕರಣ 400 ಮೀಟರ್ ರಸ್ತೆ ನಿರ್ಮಿಸುವುದು | 20.00 |

| | | |
|---|---|---|
| 3 | ಉಡುಪಿ ಜಿಲ್ಲೆ ಕುಂದಾಪುರ ತಾಲ್ಲೂಕು ಅಮಾಸೆಬೈಲು ಗ್ರಾಮದ ಅಮಾಸೆಬೈಲು ಮುಖ್ಯ ರಸ್ತೆಯಿಂದ ಮಾಂಡವಿ ತನಕ ಕಾಂಕ್ರೀಟಿಕರಣ 1500 ಮೀಟರ್ ರಸ್ತೆ ನಿರ್ಮಿಸುವುದು | 50.00 |
| 4 | ಉಡುಪಿ ಜಿಲ್ಲೆ ಕುಂದಾಪುರ ತಾಲ್ಲೂಕು ಅಮಾಸೆಬೈಲು ಗ್ರಾಮದ ಕೊರಗರ ಕಾಲೋನಿಯಿಂದ ಗುಂಡಿಮನೆ ರಸ್ತೆ ಕಾಂಕ್ರೀಟಿಕರಣ 500 ಮೀಟರ್ ರಸ್ತೆ ನಿರ್ಮಿಸುವುದು | 20.00 |
| 5 | ಉಡುಪಿ ಜಿಲ್ಲೆ ಕುಂದಾಪುರ ತಾಲ್ಲೂಕು ಅಮಾಸೆಬೈಲು ಗ್ರಾಮದ ಅಮಾಸೆಬೈಲು ಮುಖ್ಯ ರಸ್ತೆಯಿಂದ ಮಾವಿನಕಾಡು ವಾಟರ್ ಟ್ಯಾಂಕ್ ಕೃಷ್ಣ ನಾಯ್ಕರ್ ಮನೆ ತನಕ ರಸ್ತೆ ಕಾಂಕ್ರೀಟಿಕರಣ 1000 ಮೀಟರ್ ರಸ್ತೆ ನಿರ್ಮಿಸುವುದು | 20.00 |
| 6 | ಉಡುಪಿ ಜಿಲ್ಲೆ ಕುಂದಾಪುರ ತಾಲ್ಲೂಕು ಅಮಾಸೆಬೈಲು ಗ್ರಾಮದ ಬ್ರಹ್ಮ ಬೈದರ್ಕಳ ಹೊಸ್ಮನೆ ಹೆದ್ದಾರಿಗದ್ದೆ ರಸ್ತೆ ಕಾಂಕ್ರೀಟಿಕರಣ 1500 ಮೀಟರ್ ರಸ್ತೆ ನಿರ್ಮಿಸುವುದು | 60.00 |
| 7 | ಉಡುಪಿ ಜಿಲ್ಲೆ ಕುಂದಾಪುರ ತಾಲ್ಲೂಕು ಅಮಾಸೆಬೈಲು ಗ್ರಾಮದ ಕೊರಗರ ಕಾಲೋನಿಯಿಂದ ಮೂಡಹಟ್ಟಿ ರಸ್ತೆ ಕಾಂಕ್ರೀಟಿಕರಣ 500 ಮೀಟರ್ ರಸ್ತೆ ನಿರ್ಮಿಸುವುದು | 20.00 |
| 8 | ಉಡುಪಿ ಜಿಲ್ಲೆ ಕುಂದಾಪುರ ತಾಲ್ಲೂಕು ಅಮಾಸೆಬೈಲು ಗ್ರಾಮದ ಕ್ಯೊಲಾಡಿ ಓಣಿಮನೆಯಿಂದ ಚಕ್ಕೆಹಾಳೆ ತನಕ 400 ಮೀಟರ್ ರಸ್ತೆ ಕಾಂಕ್ರೀಟಿಕರಣ ರಸ್ತೆ ನಿರ್ಮಿಸುವುದು | 20.00 |
| 9 | ಉಡುಪಿ ಜಿಲ್ಲೆ ಕುಂದಾಪುರ ತಾಲ್ಲೂಕು ಅಮಾಸೆಬೈಲು ಗ್ರಾಮದ ಅಮಾಸೆಬೈಲು ಮುಖ್ಯ ರಸ್ತೆಯಿಂದ ಅಡಿಗದ್ದೆವರೆಗೆ 300 ಮೀಟರ್ ಕಾಂಕ್ರೀಟಿಕರಣ ರಸ್ತೆ ನಿರ್ಮಿಸುವುದು. | 10.00 |
| 10 | ಉಡುಪಿ ಜಿಲ್ಲೆ ಕುಂದಾಪುರ ತಾಲ್ಲೂಕು ಅಮಾಸೆಬೈಲು ಗ್ರಾಮದ ಅಮಾಸೆಬೈಲು ಮುಖ್ಯ ರಸ್ತೆಯಿಂದ ಬೆಟ್ಟಗೇರಿ ಸಂಜೀವ್ ಶೆಟ್ಟಿ ಮನೆ ತನಕ 300 ಮೀಟರ್ ಕಾಂಕ್ರೀಟಿಕರಣ ರಸ್ತೆ ನಿರ್ಮಿಸುವುದು | 10.00 |
| | **ಒಟ್ಟು** | **300.00** |

**ಷರತ್ತುಗಳು:**

1. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್ ರವರು ಈ ಆದೇಶದಲ್ಲಿನ ಕಾಮಗಾರಿಗಳು ರಾಜ್ಯದಲ್ಲಿ ಇತ್ತೀಚೆಗೆ ಸಂಭವಿಸಿದ ಪ್ರವಾಹ / ಮಳೆಹಾನಿ ದುರಸ್ತಿ ಕಾಮಗಾರಿಗಳಾಗಿರುವುದನ್ನು ಖಚಿತಪಡಿಸಿಕೊಂಡು ತಾಂತ್ರಿಕ ಹಾಗೂ ಆಡಳಿತಾತ್ಮಕ ಮಂಜೂರಾತಿಯನ್ನು ನೀಡುವುದು ಹಾಗೂ ಅಂತಹ ಕಾಮಗಾರಿಗಳು/ಸ್ಥಳಗಳು ಜಿಲ್ಲಾಧಿಕಾರಿಗಳಿಂದ ತಯಾರಿಸಲ್ಪಟ್ಟ ಪಟ್ಟಿಯಲ್ಲಿ ಸಹ ಸೇರ್ಪಡೆಗೊಳಿಸಿರುವುದನ್ನು ಖಾತ್ರಿ ಪಡಿಸಿಕೊಳ್ಳುವುದು.
2. ಈ ಆದೇಶದಲ್ಲಿನ ಕಾಮಗಾರಿಗಳ ಅಂದಾಜು ಪಟ್ಟಿಯನ್ನು ಸಂಬಂಧಪಟ್ಟ ಅನುಷ್ಠಾನ ಸಂಸ್ಥೆಯು ತಾಂತ್ರಿಕ/ಆಡಳಿತಾತ್ಮಕ ಅನುಮೋದನೆಗೆ ಜಿಲ್ಲಾ ಪಂಚಾಯತಿಗೆ ಸಲ್ಲಿಸುವಾಗ ಈ ಕಾಮಗಾರಿಗಳು ನೆರೆ ಹಾವಳಿಯಿಂದ ಹಾಳಾಗಿರುವ ಬಗ್ಗೆ ಕಾರ್ಯಪಾಲಕ ಅಭಿಯಂತರರುಗಳು ದೃಢೀಕರಿಸಿ ಮತ್ತು ಜಿಲ್ಲಾಧಿಕಾರಿಗಳಿಗೆ ಸಲ್ಲಿಸಿರುವುದನ್ನು ಖಚಿತಪಡಿಸಿಕೊಳ್ಳುವುದು.

3. ಇತ್ತೀಚೆಗೆ ಸತತವಾಗಿ ಸುರಿದ ಭಾರಿ ಮಳೆ ಹಾಗೂ ಪ್ರವಾಹದಿಂದ ಹಾನಿಗೊಳಗಾದ ಗ್ರಾಮೀಣ ರಸ್ತೆ ಮತ್ತು ಸೇತುವೆ ಕಾಮಗಾರಿಗಳ ಪಟ್ಟಿಯನ್ನು ಹಾಗೂ ಪ್ರಗತಿ ವಿವರಗಳನ್ನು ಜಿಲ್ಲಾಧಿಕಾರಿಗಳಿಗೆ ಕಾಲಕಾಲಕ್ಕೆ ಸಲ್ಲಿಸುವುದು.
4. ಪ್ರಗತಿಯ ವಿವರಗಳನ್ನು ಗಾಂಧಿ ಸಾಕ್ಷಿ ತಂತ್ರಾಂಶದಲ್ಲಿ ಅಳವಡಿಸಿ ಸಲ್ಲಿಸಿದ ನಂತರ ಆರ್ಥಿಕ ಇಲಾಖೆಯು ವಿಶೇಷ ಅನುಮೋದನೆ ನೀಡಿದಂತೆ ಈ ಕಾಮಗಾರಿಗಳಿಗೆ ಒದಗಿಸುವ ಅನುದಾನದ ಲಭ್ಯತೆಯನ್ನಾಧರಿಸಿ ಮತ್ತು ಅನುದಾನವನ್ನು ವ್ಯಪಗತವಾಗದಂತೆ ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡಲು ಕ್ರಮ ವಹಿಸಲಾಗುವುದು.
5. ಈ ಆದೇಶದಲ್ಲಿ ಅನುಮೋದಿಸಿರುವ ಕಾಮಗಾರಿಯನ್ನು ಜಿಲ್ಲಾ ಪಂಚಾಯತಿ/ ಕೆಆರ್‌ಐಡಿಎಲ್, ಇತರೆ ಯೋಜನೆಯಡಿ/ ಕಾರ್ಯಕ್ರಮದಡಿ/ ಲೆಕ್ಕ ಶೀರ್ಷಿಕೆಯಡಿ ಯಾವುದೇ ಕಾರಣಕ್ಕೂ ಪುನರಾವರ್ತನೆ ಯಾಗಿರುವುದಿಲ್ಲವೆಂಬ ಅಂಶವನ್ನು ದೃಢಪಡಿಸಿಕೊಳ್ಳತಕ್ಕದ್ದು.
6. **ಕಾಮಗಾರಿಗಳನ್ನು ಕರ್ನಾಟಕ ಪಾರದರ್ಶಕತೆ ಕಾಯಿದೆ ಪ್ರಕಾರ ಟೆಂಡರ್ ಕರೆದು ಅನುಷ್ಠಾನ ಮಾಡುವುದು.**
7. ಈ ಯೋಜನೆಯಡಿಯ ಎಲ್ಲಾ ಕಾಮಗಾರಿಗಳ ಬಳಕೆಯಾದ ಹಣ ಕುರಿತಂತೆ ಮಾಹಿತಿಯನ್ನು ಸರ್ಕಾರಕ್ಕೆ ಹಾಗೂ ಮುಖ್ಯ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆಗೆ ನೀಡುವುದು.
8. ಈ ಆದೇಶದಲ್ಲಿ ಅನುಮೋದಿಸಿರುವ ಕಾಮಗಾರಿಯ ಅಂದಾಜನ್ನು ನಿಯಮಾನುಸಾರ IRC ಮತ್ತಿತರೆ ತತ್ಸಮಾನ ತಾಂತ್ರಿಕ ನಿಬಂಧನೆಗಳಂತೆ ಪರಿಶೀಲನೆಗೆ ಒಳಪಡಿಸಿ ಸೂಕ್ತ ಪ್ರಾಧಿಕಾರದಿಂದ ಅನುಮೋದನೆ ಪಡೆಯತಕ್ಕದ್ದು.
9. ಕಾಮಗಾರಿ ಪ್ರಾರಂಭಿಸುವ ಮುನ್ನ ಮತ್ತು ಮುಕ್ತಾಯದ ನಂತರ ರಸ್ತೆಯ ಸನ್ನಿವೇಶದ ಛಾಯಾ ಚಿತ್ರಗಳನ್ನು ತೆಗೆದು ವೆಬ್‌ಸೈಟ್ ನಲ್ಲಿ ಅಳವಡಿಸತಕ್ಕದ್ದು.
10. ಪ್ರಸ್ತುತ ಈ ಶೀರ್ಷಿಕೆಯಡಿ ಜಿಲ್ಲಾ ಪಂಚಾಯತಿ ಅನುಷ್ಠಾನಗೊಳಿಸಿರುವ ಇತ್ತೀಚೆಗೆ ಶಿವಮೊಗ್ಗ ಜಿಲ್ಲೆಯ ಭದ್ರಾವತಿ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಸತತವಾಗಿ ಸುರಿದ ಭಾರಿ ಮಳೆ ಹಾಗೂ ಪ್ರವಾಹದಿಂದ ಹಾನಿಗೊಳಗಾದ ಗ್ರಾಮೀಣ ರಸ್ತೆ ಮತ್ತು ಸೇತುವೆ ಕಾಮಗಾರಿಗಳನ್ನು Worksoft works monitoring ಪದ್ಧತಿ ಮುಖಾಂತರ ಉಸ್ತುವಾರಿ ಮಾಡಬೇಕಾಗಿದ್ದು, ಈ ಸಂಬಂಧ ಪೂರ್ಣ ಮಾಹಿತಿಯನ್ನು Worksoft website ನಲ್ಲಿ ತಪ್ಪದೇ ಅಳವಡಿಸತಕ್ಕದ್ದು.
11. ಕಾಮಗಾರಿಗಳನ್ನು 3rd party/SQM/DQM ರವರಿಂದ ತಪಾಸಣೆಗೆ ಒಳಪಡಿಸತಕ್ಕದ್ದು.
12. 2014-15ನೇ ಸಾಲಿನಿಂದ ಇಲಾಖೆಯಲ್ಲಿ ಅನುಷ್ಠಾನಗೊಳಿಸುತ್ತಿರುವ ಅನುಮೋದನೆಗೊಂಡ ಕ್ರಿಯಾ ಯೋಜನೆಯಲ್ಲಿರುವ ಎಲ್ಲಾ ಯೋಜನೆಗಳ ಎಲ್ಲಾ ಕಾಮಗಾರಿಗಳ ವಿವರಗಳನ್ನು ಗಾಂಧಿ ಸಾಕ್ಷಿ ಕಾಯಕ ತಂತ್ರಾಂಶದಲ್ಲಿ ಅಳವಡಿಸಿ, ಹಣ ಪಾವತಿಯನ್ನು ಗಾಂಧಿ ಸಾಕ್ಷಿ ಕಾಯಕ ತಂತ್ರಾಂಶದಿಂದ ಪಡೆಯಲಾದ ಪಾವತಿ ಆದೇಶವಿದ್ದಲ್ಲಿ ಮಾತ್ರ ಕಾಮಗಾರಿಗಳ ಬಿಲ್ಲುಗಳ ಪಾವತಿಯನ್ನು ಕಡ್ಡಾಯವಾಗಿ ಮಾಡುವಂತೆ ಹಾಗೂ ಸರ್ಕಾರದ ಸೂಚನೆಗಳನ್ನು ಕಟ್ಟುನಿಟ್ಟಾಗಿ ಪಾಲಿಸುವಂತೆ ಈಗಾಗಲೇ ಸೂಚಿಸಲಾಗಿದೆ. ಅದರಂತೆ, ಪ್ರಸ್ತುತ ಈ ಆದೇಶದಲ್ಲಿ ಅನುಮೋದಿಸಿರುವ ಕಾಮಗಾರಿಗಳನ್ನು ಗಾಂಧಿ ಸಾಕ್ಷಿ ಕಾಯಕ ತಂತ್ರಾಂಶದಲ್ಲಿ ಕಡ್ಡಾಯವಾಗಿ ಅಳವಡಿಸುವ ನಿಬಂಧನೆಗೊಳಪಡಿಸಿದೆ.

13. ಈ ಆದೇಶದಂತೆ ಜಿಲ್ಲಾ ಪಂಚಾಯತಿ ಅನುಷ್ಠಾನಗೊಳಿಸಿದ ಕಾಮಗಾರಿಗಳಿಗೆ ತಾಲ್ಲೂಕುವಾರು ಭೌತಿಕ ಮತ್ತು ಆರ್ಥಿಕ ಪ್ರಗತಿ ವರದಿಯನ್ನು ಪ್ರತಿ ಮಾಹೆ ಮುಖ್ಯ ಇಂಜಿನಿಯರ್, ಪಂ.ರಾಜ್ ಇಂಜಿನಿಯರಿಂಗ್ ಇಲಾಖೆ, ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತಿ, ಉಡುಪಿ ರವರ ಮುಖಾಂತರ ಸರ್ಕಾರಕ್ಕೆ ನೀಡುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಪತ್ರ ಸಂಖ್ಯೆ: ಆಇ 03 ಟಿಎಸ್‌ಜಿ 2019, ದಿನಾಂಕ: 23.10.2019ರ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,

(ಡಾ.ಬೂವನಹಳ್ಳಿ ನಾಗರಾಜ್)
ನಿರ್ದೇಶಕರು ಗ್ರಾಮೀಣ ಮೂಲ ಸೌಕರ್ಯ
ಹಾಗೂ ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**ಪ್ರತಿಯನ್ನು:**

1. ಮಹಾಲೇಖಪಾಲರು (ಲೆಕ್ಕಪತ್ರ), ಕರ್ನಾಟಕ, ಬೆಂಗಳೂರು.
2. ಮಹಾಲೇಖಪಾಲರು (ಆಡಿಟ್-1), ಕರ್ನಾಟಕ, ಬೆಂಗಳೂರು.
3. ಮಹಾಲೇಖಪಾಲರು (ಆಡಿಟ್-2), ಕರ್ನಾಟಕ, ಬೆಂಗಳೂರು.
4. ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರ ಆಪ್ತ ಕಾರ್ಯದರ್ಶಿಗಳು, ವಿಧಾನ ಸೌಧ, ಬೆಂಗಳೂರು.
5. ಅಪರ ಮುಖ್ಯ ಕಾರ್ಯದರ್ಶಿಗಳು ಹಾಗೂ ಅಭಿವೃದ್ಧಿ ಆಯುಕ್ತರು, ವಿಧಾನ ಸೌಧ, ಬೆಂಗಳೂರು
6. ಪ್ರಧಾನ ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ ಇವರ ಆಪ್ತ ಕಾರ್ಯದರ್ಶಿಗಳು, ವಿಧಾನ ಸೌಧ, ಬೆಂಗಳೂರು
7. ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ (PMU)(IF), 5ನೇ ಹಂತ, ಬಹುಮಹಡಿ ಕಟ್ಟಡ, ಬೆಂಗಳೂರು
8. ಪ್ರಧಾನ ಕಾರ್ಯದರ್ಶಿಗಳು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬೆಂಗಳೂರು
9. ಪ್ರಧಾನ ಕಾರ್ಯದರ್ಶಿಗಳು (ಪಂರಾಜ್), ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ಇಲಾಖೆ, ಬೆಂಗಳೂರು.
10. ವಿಶೇಷಾಧಿಕಾರಿಗಳು (ಜಿಪಂ) ಮತ್ತು ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ, ಆರ್ಥಿಕ ಇಲಾಖೆ, ವಿಧಾನ ಸೌಧ, ಬೆಂಗಳೂರು
11. ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬೆಂಗಳೂರು.
12. ನಿರ್ದೇಶಕರು, ಖಜಾನೆ ಇಲಾಖೆ, ಬೆಂಗಳೂರು.
13. ಉಪ ನಿರ್ದೇಶಕರು, ನೆಟ್‌ವರ್ಕ್ ಮ್ಯಾನೇಜ್‌ಮೆಂಟ್ ಸೆಂಟರ್, ಟ್ರೆಜರಿ ಡಿಪಾರ್ಟ್‌ಮೆಂಟ್, ಖನಿಜ ಭವನ, ರೇಸ್‌ಕೋರ್ಸ್ ರಸ್ತೆ, ಬೆಂಗಳೂರು.
14. ಅಧೀನ ಕಾರ್ಯದರ್ಶಿಗಳು (ವೆಚ್ಚ-6), ಜಿ.ಪಂ. ಆರ್ಥಿಕ ಇಲಾಖೆ, ವಿಧಾನಸೌಧ, ಬೆಂಗಳೂರು.
15. ಮುಖ್ಯ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆ, ಬೆಂಗಳೂರು.
16. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್, ಉಡುಪಿ.
17. ಅಧೀಕ್ಷಕ ಇಂಜಿನಿಯರ್, ಮಂಗಳೂರು ವೃತ್ತ
18. ಕಾರ್ಯಪಾಲಕ ಅಭಿಯಂತರರು, ಪಿ.ಆರ್.ಇ.ಡಿ. ವಿಭಾಗ, ಉಡುಪಿ

19. ಜಿಲ್ಲಾ ಖಜಾನಾಧಿಕಾರಿಗಳು, ಉಡುಪಿ

20. ಅಧ್ಯಕ್ಷರು, ಅಮಾಸೆಬೈಲು ಚಾರಿಟೇಬಲ್ ಟ್ರಸ್ಟ್ (ರಿ), ಕುಂದಾಪುರ ತಾಲ್ಲೂಕು, ಉಡುಪಿ ಜಿಲ್ಲೆ

21. ಮಾಹಿತಿ ಕೇಂದ್ರದ ಗಣಕ ಕೋಶ ಮುಖ್ಯಸ್ಥರು, ಗ್ರಾಅಪಂರಾ ಇಲಾಖೆ ಇವರಿಗೆ ಇಲಾಖೆಯ ಅಂತರ್ಜಾಲದಲ್ಲಿ ಅಳವಡಿಸಲು ಹಾಗೂ ಗ್ರೂಪ್ ಮೈಲ್ ನಲ್ಲಿ ರವಾನಿಸಲು ಸೂಚಿಸಿದೆ.

22. ರಕ್ಷಾ ಕಡತ / ಹೆಚ್ಚುವರಿ ಪ್ರತಿ.

ಮೊದಲನೇ ಮಹಡಿ
ರಜತಾದ್ರಿ, " ಸಿ" ಬ್ಲಾಕ್,
ಮಣಿಪಾಲ, ಉಡುಪಿ - 576104




# ಉಡುಪಿ ಜಿಲ್ಲಾ ಪಂಚಾಯತ್

ದೂರವಾಣಿ: 0820-2574945
Fax No: 0820- 2574880
Email:zpudupi@gmail.com

ಸಂ:ಉಜಿಪಂ:ಅಭಿವೃದ್ಧಿ:ಸಿಆರ್ :2019-20

ದಿನಾಂಕ: 29-1-2020.

2136
4/2/2020

ರಿಗೆ:

ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ,
ಬಹುಮಹಡಿಗಳ ಕಟ್ಟಡ,
ಡಾ: ಬಿ.ಆರ್. ಅಂಬೇಡ್ಕರ್ ವೀದಿ,
ಬೆಂಗಳೂರು-01.

ಮಾನ್ಯರೆ,

ವಿಷಯ: ಮಳೆ ಹಾಗೂ ಪ್ರವಾಹದಿಂದಾಗಿ ಹಾನಿಗೊಳಗಾದ ಕುಂದಾಪುರ ತಾಲೂಕಿನ ಅಮಾಸೆಬೈಲು ಗ್ರಾಮ ವ್ಯಾಪ್ತಿಯ ರಸ್ತೆಗಳ ಪುನರ್ ರಚನೆ ಹಾಗೂ ನವೀಕರಣ ಕಾಮಗಾರಿಗಳ ಪ್ರಸ್ತಾವನೆಗಳನ್ನು ಅನುಮೋದನೆಗಾಗಿ ಸಲ್ಲಿಸುವ ಬಗ್ಗೆ.

ಉಲ್ಲೇಖ: 1. ನಿರ್ದೇಶಕರು, ಗ್ರಾ.ಮೂ.ಸೌ, ಗ್ರಾಮೀಣಾಭಿವೃದ್ಧಿ ಮತ್ತು ಪಂ. ರಾಜ್ ಇಲಾಖೆ ಇವರ ಪತ್ರ ಸಂ:ಗ್ರಾಅಪ:123:ಆರ್ ಆರ್ ಸಿ:2019 ದಿನಾಂಕ: 3-1-2020.
2. ಕಾರ್ಯನಿರ್ವಾಹಕ ಇಂಜಿನಿಯರ್, ಪಂ. ರಾಜ್ ಇಂ. ವಿಭಾಗ, ಉಡುಪಿ ಇವರ ಪತ್ರ ಸಂ:ಕಾಇಂ:ಪಂರಾಇಂವಿಉ:ಅತಿವೃಷ್ಟಿ:ವರದಿ:2019-20:ಎಇ 4760 ದಿನಾಂಕ: 28-1-2020.

-0-

ಮೇಲಿನ ವಿಷಯಕ್ಕೆ ಸಂಬಂಧಿಸಿದಂತೆ ಉಡುಪಿ ಜಿಲ್ಲೆಯ ಕುಂದಾಪುರ ತಾಲೂಕು ಅಮಾಸೆಬೈಲು ಗ್ರಾಮದಲ್ಲಿ ಮಳೆ ಹಾಗೂ ಪ್ರವಾಹದಿಂದಾಗಿ ಹಾನಿಗೊಳಗಾದ ರಸ್ತೆಗಳನ್ನು ನವೀಕರಿಸುವ / ಪುನರ್ ರಚಿಸುವ ಬಗ್ಗೆ ಮಂಡಿಸಲಾದ ಪ್ರಸ್ತಾವನೆಯಡಿ ಬದಲಾವಣೆ ಕೋರಿರುವ ಕಾಮಗಾರಿಗಳ ಮೇಲೆ ಉಲ್ಲೇಖ (1)ರ ಸರ್ಕಾರದ ಪತ್ರದಲ್ಲಿ ಶಿಫಾರಸ್ಸನ್ನು ಕೋರಲಾಗಿರುತ್ತದೆ. ಈ ಬಗ್ಗೆ ಇದೀಗ ಕಾರ್ಯನಿರ್ವಾಹಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ ಇವರಿಂದ ಉಲ್ಲೇಖ (2) ರಂತೆ ವರದಿಯನ್ನು ಪಡೆಯಲಾಗಿರುತ್ತದೆ. ಸದ್ರಿ ವರದಿಯಂತೆ ಪ್ರಸ್ತಾವಿತ ಬದಲಿ ಪ್ರಸ್ತಾವನೆಯ ಕಾಮಗಾರಿಗಳು ಮಳೆಯಿಂದ ಹಾನಿಗೊಳಗಾದ ಕಾಮಗಾರಿಗಳಾಗಿದ್ದು, ಸದ್ರಿ ರಸ್ತೆಗಳನ್ನು ದುರಸ್ತಿಪಡಿಸುವುದು ಅತೀ ಅವಶ್ಯಕವಾಗಿರುವುದಾಗಿಯೂ ಹಾಗೂ ಈ ರಸ್ತೆಗಳು ನೆರೆ ಮತ್ತು ಪ್ರವಾಹ ಪೀಡಿತ ಪ್ರದೇಶ ವ್ಯಾಪ್ತಿಯಲ್ಲಿ ಬರುವುದಾಗಿಯೂ ದೃಢೀಕರಿಸಿರುತ್ತಾರೆ. ಆದ್ದರಿಂದ ಒಟ್ಟು ರೂ.300 ಲಕ್ಷ ಅನುದಾನ ಬೇಡಿಕೆಯ 10 ರಸ್ತೆ ಅಭಿವೃದ್ಧಿ ಕಾಮಗಾರಿಗಳಿಗೆ ಸರ್ಕಾರದಿಂದ ವಿಶೇಷ ನೆಲೆಯಲ್ಲಿ ಮಂಜೂರಾತಿಯೊಂದಿಗೆ ಅನುದಾನ ಬಿಡುಗಡೆಗಾಗಿ ಪ್ರಸ್ತಾವನೆಯನ್ನು ಸಲ್ಲಿಸಿದೆ. ಪ್ರಸ್ತಾವನೆಯ ಪ್ರತಿಯನ್ನು ಇದರೊಂದಿಗೆ ಲಗತ್ತಿಸಿ ಸಲ್ಲಿಸಿದೆ.

ತಮ್ಮ ವಿಶ್ವಾಸಿ,

Preeti Gehlot 29/01

ಮುಖ್ಯ ಕಾರ್ಯನಿರ್ವಹಣಾಧಿಕಾರಿ,
ಜಿಲ್ಲಾ ಪಂಚಾಯತ್, ಉಡುಪಿ.

ಪ್ರತಿ: ನಿರ್ದೇಶಕರು, ಗ್ರಾಮೀಣ ಮೂಲಭೂತ ಸೌಲಭ್ಯಗಳು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬೆಂಗಳೂರು.

# 2019-20 ನೇ ಸಾಲಿನ ಗ್ರಾಮೀಣ ರಸ್ತೆ ಮತ್ತು ಸೇತುವೆ ಕಾಮಗಾರಿಗಳ ಪುನರ್ ರಚನೆ, ನವೀಕರಣ ಹಾಗೂ ಪುನರ್ ನಿರ್ಮಾಣ

| ಕ್ರ.ಸಂ. | ಅನುಮೋದನೆ ನೀಡಿದ ಕಾಮಗಾರಿಗಳ ವಿವರ | ಅಂದಾಜು ಮೊತ್ತ ಲಕ್ಷಗಳಲ್ಲಿ | ಬದಲಾವಣೆಗೆ ಕೋರಿರುವ ಕಾಮಗಾರಿಗಳು | ಅಂದಾಜು ಮೊತ್ತ ಲಕ್ಷಗಳಲ್ಲಿ | ಷರಾ |
|---|---|---|---|---|---|
| 1 | ಉಡುಪಿ ಜಿಲ್ಲೆ ಕುಂದಾಪುರ ತಾಲೂಕು ಅಮಾಸೆಬೈಲು ಗ್ರಾಮದ ಪಂಜುರ್ಲಿ ಹಾಡಿಯಿಂದ ಬುಡ್ಡು ಪೂಜಾರ್ತಿ ಮನೆವರೆಗೆ ಕಾಂಕ್ರೀಟೀಕರಣ 2000 ಮೀಟರ್ ರಸ್ತೆ ನಿರ್ಮಿಸುವುದು | 70.00 | ಮಚ್ಚಟ್ಟು ಗ್ರಾಮ ಕುಂದರಾಧಕೃಷ್ಣ ಆಚಾರಿ ಮನೆಯಿಂದ ಹೆಮ್ಮಣ್ಣು ಅಂಗನವಾಡಿ ರಸ್ತೆ ನಿರ್ಮಾಣ | 50.00 | ಭಾರಿ ಮಳೆಯಿಂದ ಸದ್ರಿ ರಸ್ತೆ ಹಾನಿಯಾಗಿದ್ದು, ದುರಸ್ಥಿ ಪಡಿಸುವುದು ಅತೀ ಅವಶ್ಯಕತೆ ಇರುತ್ತದೆ. |
| 2 | ಉಡುಪಿ ಜಿಲ್ಲೆ ಕುಂದಾಪುರ ತಾಲೂಕು ಅಮಾಸೆಬೈಲು ಗ್ರಾಮದ ದೇವಸ್ಥಾನದಿಂದ ಮೂಡಬೈಲು ಮದಗದ ತನಕ ಕಾಂಕ್ರೀಟೀಕರಣ 400 ಮೀಟರ್ ರಸ್ತೆ ನಿರ್ಮಿಸುವುದು | 20.00 | ಮಚ್ಚಟ್ಟು ಗ್ರಾಮ ಬಟ್ಟಲಗುಂಡಿಯಿಂದ ಚಂದ್ರುನಾಯ್ಕನ ಮನೆಯ ವರೆಗೆ | 50.00 | ಭಾರಿ ಮಳೆಯಿಂದ ಸದ್ರಿ ರಸ್ತೆ ಹಾನಿಯಾಗಿದ್ದು, ದುರಸ್ಥಿ ಪಡಿಸುವುದು ಅತೀ ಅವಶ್ಯಕತೆ ಇರುತ್ತದೆ. |
| 3 | ಉಡುಪಿ ಜಿಲ್ಲೆ ಕುಂದಾಪುರ ತಾಲೂಕು ಅಮಾಸೆಬೈಲು ಗ್ರಾಮದ ಅಮಾಸೆಬೈಲು ಮುಖ್ಯ ರಸ್ತೆಯಿಂದ ಮಾಂಡವಿ ತನಕ ಕಾಂಕ್ರೀಟೀಕರಣ 1500 ಮೀಟರ್ ರಸ್ತೆ ನಿರ್ಮಿಸುವುದು | 50.00 | ರಾಮ ಬಾಯರಿ ಮನೆಯಿಂದ ಅಜ್ಜರ ಕಲ್ಲು ರಸ್ತೆ | 20.00 | ಭಾರಿ ಮಳೆಯಿಂದ ಸದ್ರಿ ರಸ್ತೆ ಹಾನಿಯಾಗಿದ್ದು, ದುರಸ್ಥಿ ಪಡಿಸುವುದು ಅತೀ ಅವಶ್ಯಕತೆ ಇರುತ್ತದೆ. |
| 4 | ಉಡುಪಿ ಜಿಲ್ಲೆ ಕುಂದಾಪುರ ತಾಲೂಕು ಅಮಾಸೆಬೈಲು ಗ್ರಾಮದ ಕೊರಗರ ಕಾಲೋನಿಯಿಂದ ಗುಂಡಿಮನೆ ರಸ್ತೆ ಕಾಂಕ್ರೀಟೀಕರಣ 500 ಮೀಟರ್ ರಸ್ತೆ ನಿರ್ಮಿಸುವುದು | 20.00 | ಮಂತ್ರಿಕೆ ಅಡ್ಡ ರಸ್ತೆಯಿಂದ ಹುಲಿಪಂಜರ ಜೆಡ್ಡಿಗೆ ಹೋಗುವ ರಸ್ತೆ | 30.00 | ಭಾರಿ ಮಳೆಯಿಂದ ಸದ್ರಿ ರಸ್ತೆ ಹಾನಿಯಾಗಿದ್ದು, ದುರಸ್ಥಿ ಪಡಿಸುವುದು ಅತೀ ಅವಶ್ಯಕತೆ ಇರುತ್ತದೆ. |
| 5 | ಉಡುಪಿ ಜಿಲ್ಲೆ ಕುಂದಾಪುರ ತಾಲೂಕು ಅಮಾಸೆಬೈಲು ಗ್ರಾಮದ ಅಮಾಸೆಬೈಲು ಮುಖ್ಯ ರಸ್ತೆಯಿಂದ ಮಾವಿನಕಾಡು ವಾಟರ್ ಟ್ಯಾಂಕ್ ಕೃಷ್ಣ ನಾಯ್ಕರ್ ಮನೆ ತನಕ ರಸ್ತೆ ಕಾಂಕ್ರೀಟೀಕರಣ 1000 ಮೀಟರ್ ರಸ್ತೆ ನಿರ್ಮಿಸುವುದು | 20.00 | ಹೊಸದಾರು ಕಂಬಳಗದ್ದೆ ರಸ್ತೆ ಅಭಿವೃದ್ಧಿ | 25.00 | ಭಾರಿ ಮಳೆಯಿಂದ ಸದ್ರಿ ರಸ್ತೆ ಹಾನಿಯಾಗಿದ್ದು, ದುರಸ್ಥಿ ಪಡಿಸುವುದು ಅತೀ ಅವಶ್ಯಕತೆ ಇರುತ್ತದೆ. |
| 6 | ಉಡುಪಿ ಜಿಲ್ಲೆ ಕುಂದಾಪುರ ತಾಲೂಕು ಅಮಾಸೆಬೈಲು ಗ್ರಾಮದ ಬ್ರಹ್ಮ ಬೈದರ್ಕಳ ಪೊಸ್ಕನೆ ಹೆದ್ದಾರಿಗದ್ದೆ ರಸ್ತೆ ಕಾಂಕ್ರೀಟೀಕರಣ 1500 ಮೀಟರ್ ರಸ್ತೆ ನಿರ್ಮಿಸುವುದು | 60.00 | ರಟ್ಟಾಡಿ 2 ನೇ ವಾರ್ಡಿನ ನಿಲ್ಪಿಕಲ್ಲಿನಿಂದ ತಪ್ಪಲು ತನಕ ರಸ್ತೆ | 25.00 | ಭಾರಿ ಮಳೆಯಿಂದ ಸದ್ರಿ ರಸ್ತೆ ಹಾನಿಯಾಗಿದ್ದು, ದುರಸ್ಥಿ ಪಡಿಸುವುದು ಅತೀ ಅವಶ್ಯಕತೆ ಇರುತ್ತದೆ. |

| | | | | | |
|---|---|---|---|---|---|
| 2 | ಉಡುಪಿ ಜಿಲ್ಲೆ ಕುಂದಾಪುರ ತಾಲೂಕು ಅಮಾಸೆಬೈಲು ಗ್ರಾಮದ ದೇವಸ್ಥಾನದಿಂದ ಮೂಡಬೈಲು ಮದಗದ ತನಕ ಕಾಂಕ್ರೀಟೀಕರಣ 400 ಮೀಟರ್ ರಸ್ತೆ ನಿರ್ಮಿಸುವುದು | 20.00 | ಮುಚ್ಚಟ್ಟು ಗ್ರಾಮ ಬಟ್ಟುಗುಂಡಿಯಿಂದ ಚಂದ್ರನಾಯ್ಕನ ಮನೆಯ ವರೆಗೆ | 50.00 | ಭಾರಿ ಮಳೆಯಿಂದ ಸದ್ರಿ ರಸ್ತೆ ಹಾನಿಯಾಗಿದ್ದು, ದುರಸ್ಥಿ ಪಡಿಸುವುದು ಅತೀ ಅವಶ್ಯಕತೆ ಇರುತ್ತದೆ. |
| 3 | ಉಡುಪಿ ಜಿಲ್ಲೆ ಕುಂದಾಪುರ ತಾಲೂಕು ಅಮಾಸೆಬೈಲು ಗ್ರಾಮದ ಅಮಾಸೆಬೈಲು ಮುಖ್ಯ ರಸ್ತೆಯಿಂದ ಮಾಂಡವಿ ತನಕ ಕಾಂಕ್ರೀಟೀಕರಣ 1500 ಮೀಟರ್ ರಸ್ತೆ ನಿರ್ಮಿಸುವುದು | 50.00 | ಗ್ರಾಮ ಬಾಯರಿ ಮನೆಯಿಂದ ಅಜ್ಜರ ಕಲ್ಲು ರಸ್ತೆ | 20.00 | ಭಾರಿ ಮಳೆಯಿಂದ ಸದ್ರಿ ರಸ್ತೆ ಹಾನಿಯಾಗಿದ್ದು, ದುರಸ್ಥಿ ಪಡಿಸುವುದು ಅತೀ ಅವಶ್ಯಕತೆ ಇರುತ್ತದೆ. |
| 7 | ಉಡುಪಿ ಜಿಲ್ಲೆ ಕುಂದಾಪುರ ತಾಲೂಕು ಅಮಾಸೆಬೈಲು ಗ್ರಾಮದಕೊರಗರ ಕಾಲೋನಿಯಿಂದ ಮೂಡಪಟ್ಟಿ ರಸ್ತೆ ಕಾಂಕ್ರೀಟೀಕರಣ 500 ಮೀಟರ್ ರಸ್ತೆ ನಿರ್ಮಿಸುವುದು | 20.00 | ಅಮಾಸೆಬೈಲು ಗರಡಿಯಿಂದ ಹೆದ್ದಾರಿಗದ್ದೆ ರಸ್ತೆ ಅಭಿವೃದ್ಧಿ | 50.00 | ಭಾರಿ ಮಳೆಯಿಂದ ಸದ್ರಿ ರಸ್ತೆ ಹಾನಿಯಾಗಿದ್ದು, ದುರಸ್ಥಿ ಪಡಿಸುವುದು ಅತೀ ಅವಶ್ಯಕತೆ ಇರುತ್ತದೆ. |
| 8 | ಉಡುಪಿ ಜಿಲ್ಲೆ ಕುಂದಾಪುರ ತಾಲೂಕು ಅಮಾಸೆಬೈಲು ಗ್ರಾಮದ ಕ್ಯೂಲಾಡಿ ಓಣಿಮನೆಯಿಂದ ಚಿಕ್ಕಹಾಳಿ ತನಕ 400 ಮೀಟರ್ ರಸ್ತೆ ಕಾಂಕ್ರೀಟೀಕರಣ ರಸ್ತೆ ನಿರ್ಮಿಸುವುದು | 20.00 | ಅಮಾಸೆಬೈಲು ಮುಖ್ಯ ರಸ್ತೆಯಿಂದ ಮಾವಿನಕಾಡು ವಾಟರ್ ಟ್ಯಾಂಕ್ ವರೆಗೆ | 20.00 | ಭಾರಿ ಮಳೆಯಿಂದ ಸದ್ರಿ ರಸ್ತೆ ಹಾನಿಯಾಗಿದ್ದು, ದುರಸ್ಥಿ ಪಡಿಸುವುದು ಅತೀ ಅವಶ್ಯಕತೆ ಇರುತ್ತದೆ. |
| 9 | ಉಡುಪಿ ಜಿಲ್ಲೆ ಕುಂದಾಪುರ ತಾಲೂಕು ಅಮಾಸೆಬೈಲು ಗ್ರಾಮದ ಅಮಾಸೆಬೈಲು ಮುಖ್ಯ ರಸ್ತೆಯಿಂದ ಅಡಿಗದ್ದೆವರೆಗೆ 300 ಮೀಟರ್ ಕಾಂಕ್ರೀಟೀಕರಣ ರಸ್ತೆ ನಿರ್ಮಿಸುವುದು | 10.00 | ಕನ್ನಿಕೇರಿ ಬಸವಪೂಜಾರಿ ಮನೆಯಿಂದ ಬಡಾಬೆಟ್ಟು ಮನೆಯವರೆಗೆ | 30.00 | ಭಾರಿ ಮಳೆಯಿಂದ ಸದ್ರಿ ರಸ್ತೆ ಹಾನಿಯಾಗಿದ್ದು, ದುರಸ್ಥಿ ಪಡಿಸುವುದು ಅತೀ ಅವಶ್ಯಕತೆ ಇರುತ್ತದೆ. |
| 10 | ಉಡುಪಿ ಜಿಲ್ಲೆ ಕುಂದಾಪುರ ತಾಲೂಕು ಅಮಾಸೆಬೈಲು ಗ್ರಾಮದ ಅಮಾಸೆಬೈಲು ಮುಖ್ಯ ರಸ್ತೆಯಿಂದ ಬೆಟ್ಟಿಗೇರಿ ಸಂಜೀವ್ ಶೆಟ್ಟಿ ಮನೆ ತನಕ 300 ಮೀಟರ್ ಕಾಂಕ್ರೀಟೀಕರಣ ರಸ್ತೆ ನಿರ್ಮಿಸುವುದು | 10.00 | | | ಭಾರಿ ಮಳೆಯಿಂದ ಸದ್ರಿ ರಸ್ತೆ ಹಾನಿಯಾಗಿದ್ದು, ದುರಸ್ಥಿ ಪಡಿಸುವುದು ಅತೀ ಅವಶ್ಯಕತೆ ಇರುತ್ತದೆ. |
| | **ಒಟ್ಟು** | **300.00** | | **300.00** | |

ಕಾರ್ಯನಿರ್ವಾಹಕ ಇಂಜಿನೀಯರ್,
ಪಂಚಾಯತ್ ರಾಜ್ ಇಂಜಿನೀಯರಿಂಗ್ ವಿಭಾಗ,
ಉಡುಪಿ